# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರ.ಸಂ. : 795

ಸದಸ್ಯರ ಹೆಸರು : ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ)

ಉತ್ತರಿಸುವ ದಿನಾಂಕ : 11-03-2020

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರದ ಗೋಮಾಳದ ಜಮೀನುಗಳನ್ನು ಹೇಗೆ ಮತ್ತು ಯಾರಿಗೆ ಮಂಜೂರು ಮಾಡಲಾಗುವುದು; ಮತ್ತು ಯಾವ ಕಾಯ್ದೆ ಅಥವಾ ಕಾನೂನಿನಡಿ ಮಂಜೂರು ಮಾಡಲಾಗುವುದು; (ಪ್ರತಿ ಒದಗಿಸುವುದು) | ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(1)ರಡಿಯಲ್ಲಿ ಗ್ರಾಮದಲ್ಲಿನ ಪ್ರತಿ ನೂರು ಜಾನುವಾರುಗಳಿಗೆ 12 ಹೆಕ್ಟೇರ್ (30-00 ಎಕರೆ) ಜಮೀನಿನಂತೆ ಮೀಸಲಿರಿಸಿದ ನಂತರ ಉಳಿಯುವ ಹೆಚ್ಚುವರಿ ಗೋಮಾಳ ಜಮೀನನ್ನು ನಿಯಮ 97(4)ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸರ್ಕಾರದ ಉದ್ದೇಶಗಳಿಗೆ ಕಾಯ್ದಿರಿಸಬಹುದಾಗಿದೆ. |
| ಆ) | ಈ ಜಮೀನುಗಳ ಮಂಜೂರಾತಿಯಲ್ಲಿ ನಿಗದಿಪಡಿಸಿರುವ ಮಾನದಂಡಗಳೇನು; ಎಷ್ಟು ಎಕರೆ ವಿಸ್ತೀರ್ಣದ ಜಮೀನು ಮಂಜೂರು ಮಾಡಬಹುದಾಗಿರುತ್ತದೆ; | ಮಂಜೂರಾತಿ ಉದ್ದೇಶಗಳಿಗನುಗುಣವಾಗಿ ಮಂಜೂರು / ಕಾಯ್ದಿರಿಸಲು ಕ್ರಮವಹಿಸಲಾಗುವುದು. |
| ಇ) | ಬಗರ್‌ಹುಕುಂ ಸಮಿತಿಯಲ್ಲಿ ಜಮೀನು ಮಂಜೂರು ಮಾಡಲು ನಿಗದಿಪಡಿಸಿರುವ ಮಾನದಂಡಗಳೇನು; ಮಂಜೂರಾತಿಗೆ ಯಾರು ಅರ್ಜಿ ಸಲ್ಲಿಸಬಹುದಾಗಿದೆ; ಸಮಿತಿಯಲ್ಲಿ ಇರುವ ಸದಸ್ಯರುಗಳ ಯಾರು? | ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 108-ಎಫ್ ರಡಿಯಲ್ಲಿ ಅವಕಾಶ ಕಲ್ಪಿಸಿದಂತೆ ರೈತರು, ಅತೀ ಸಣ್ಣ ರೈತರು ಹಾಗೂ ಭೂ ರಹಿತರು ಅರ್ಜಿ ಸಲ್ಲಿಸಬಹುದಾಗಿದ್ದು, ಅರ್ಜಿ ಸಲ್ಲಿಸಲು ಈ ಕೆಳಕಂಡ ಮಾನದಂಡಗಳನ್ನು ನಿಗದಿಪಡಿಸಲಾಗಿದೆ:-<br>1) ಅರ್ಜಿದಾರರು ಹದಿನೆಂಟು ವರ್ಷಗಳ ವಯಸ್ಸಿನವರಾಗಿರಬೇಕು.<br>2) ಅವರು ಭೂಮಿಯು ಇರುವ ಅಥವಾ ಪಕ್ಕದಲ್ಲಿರುವ ತಾಲ್ಲೂಕಿನಲ್ಲಿ ತಾಲ್ಲೂಕಿನ ಪರಿಮಿತಿಯೊಳಗೆ ಖಾಯಂ ನಿವಾಸಿಯಾಗಿರಬೇಕು.<br>3) ಕರ್ನಾಟಕ ಭೂ ಸುಧಾರಣಾ ಅಧಿನಿಯಮ, 1961ರ ಉಪಬಂಧಗಳಿಗನುಸಾರವಾಗಿ ಭೂಮಿಯನ್ನು ಹೊಂದಲು ಅರ್ಹನಿರಬೇಕು.<br>4) ದಿನಾಂಕ: 14/04/1990ರ (ಇತ್ತೀಚಿನ ತಿದ್ದುಪಡಿಯಂತೆ ದಿನಾಂಕ: 01/01/2005) ದಿನಕ್ಕೆ ಕಡೆಯ ಪಕ್ಷ ಮೂರು ವರ್ಷಗಳು ಕಡಿಮೆಯಿಲ್ಲದ ಅವಧಿಯ ನಿರಂತರ ಭೂಮಿಯ ಅಧಿಕೃತ ಅದಿಭೋಗನಾಗಿರಬೇಕು.<br>5) ಅನುಸೂಚಿತ ಜಾತಿ / ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳ ಸಂದರ್ಭದಲ್ಲಿ ಅಂತಹ ಅವಧಿಯು ಒಂದು ವರ್ಷಕ್ಕಿಂತ ಕಡಿಮೆ ಇರತಕ್ಕದ್ದಲ್ಲ. |

| | | |
|---|---|---|
| | | ಕರ್ನಾಟಕ ಭೂ ಕಂದಾಯ ನಿಯಮಗಳು, 1966 ರ ನಿಯಮ 108-ಇ ರಡಿಯಲ್ಲಿ ವಿಧಾನಸಭಾ ಕ್ಷೇತ್ರವಾರು ರಚಿಸಲಾಗುವ ಬಗರ್‌ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಗೆ ಅಧ್ಯಕ್ಷರು ಮತ್ತು ಸದಸ್ಯರುಗಳನ್ನು ಈ ಕೆಳಕಂಡಂತೆ ನಾಮನಿರ್ದೇಶನ ಮಾಡಲು ಅವಕಾಶ ಕಲ್ಪಿಸಲಾಗಿದೆ:-<br>1) ತಾಲ್ಲೂಕಿನ ಪ್ರಮುಖ ಭಾಗವನ್ನು ಪ್ರತಿನಿಧಿಸುವ ಕರ್ನಾಟಕ ವಿಧಾನಸಭೆಯ ಸದಸ್ಯರು ಅಧ್ಯಕ್ಷರಾಗಿರುತ್ತಾರೆ.<br>2) ರಾಜ್ಯ ಸರ್ಕಾರದಿಂದ ನಾಮನಿರ್ದೇಶನ ಮಾಡಲ್ಪಡುವ ಮೂವರು ವ್ಯಕ್ತಿಗಳಿದ್ದು, ಅವರಲ್ಲಿ ಒಬ್ಬರು ಮಹಿಳೆಯಾಗಿರತಕ್ಕದ್ದು ಹಾಗೂ ಇನ್ನೊಬ್ಬರು ಪರಿಶಿಷ್ಟಜಾತಿ/ಪರಿಶಿಷ್ಟ ಪಂಗಡದವರಾಗಿರುತಕ್ಕದ್ದಾಗಿದೆ.<br>3) ಸಂಬಂಧಪಟ್ಟ ತಾಲ್ಲೂಕಿನ ತಹಶೀಲ್ದಾರ್ ರವರು ಸಮಿತಿಯ ಕಾರ್ಯದರ್ಶಿ ಆಗಿರತಕ್ಕದ್ದಾಗಿದೆ. |
| ಈ) | ಜಮೀನುರಹಿತರು ಉಳುಮೆ ಮಾಡುತ್ತಿದ್ದಲ್ಲಿ ಅಂತಹವರಿಗೆ ಎಷ್ಟು ವಿಸ್ತೀರ್ಣದ ಜಮೀನು ಮಂಜೂರು ಮಾಡಬಹುದು ಅಥವಾ ಸ್ವಂತ ಜಮೀನಿಗೆ ಹೊಂದಿಕೊಂಡಂತಿರುವ ಹೆಚ್ಚುವರಿ ಗೋಮಾಳದ ಜಮೀನನ್ನು ಉಳುಮೆ ಮಾಡುತ್ತಿದ್ದರೆ ಅಂತಹವರಿಗೆ ಎಷ್ಟು ವಿಸ್ತೀರ್ಣದ ಜಮೀನು ಮಂಜೂರು ಮಾಡಬಹುದು; ಮಾಹಿತಿ ನೀಡುವುದು; | ಅನಧಿಕೃತವಾಗಿ ಸಾಗುವಳಿ ಮಾಡುತ್ತಿರುವವರಿಗೆ ಪ್ರಸ್ತುತ ಅವರು ಹೊಂದಿರುವ ಹಿಡುವಳಿ ಜಮೀನನ್ನು ಒಳಗೊಂಡಂತೆ ಗರಿಷ್ಠ 2 ಹೆಕ್ಟೇರ್ (4-38 ಎಕರೆ/ಗುಂಟೆ) ಜಮೀನನ್ನು ಮಂಜೂರು ಮಾಡಲು ಅವಕಾಶವಿರುತ್ತದೆ. |
| ಉ) | ಬಗರ್‌ಹುಕುಂ ಸಮಿತಿಯ ಕಣ್ತಪ್ಪಿನಿಂದ ಅನರ್ಹರಿಗೆ ಜಮೀನು ಮಂಜೂರಾಗಿದ್ದ ಪಕ್ಷದಲ್ಲಿ ಕಾನೂನು ಪ್ರಕಾರ ಜಮೀನು ಹಿಂಪಡೆಯಲು ಸಾಧ್ಯವೆ; ಸಾಧ್ಯವಾದಲ್ಲಿ ಅದನ್ನು ಪಡೆಯುವುದು ಹೇಗೆ ಕಾಯ್ದೆಯ ಪ್ರತಿ ಒದಗಿಸುವುದು? | ಬಗರ್‌ಹುಕುಂ ಸಮಿತಿಯು ನಿಯಮಬಾಹಿರವಾಗಿ ಅನರ್ಹರಿಗೆ ಸಕ್ರಮ ಮಾಡಿದ ಜಮೀನಿನ ಸಕ್ರಮಾತಿಯನ್ನು ರದ್ದುಪಡಿಸಲು ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 108-ಕೆ ರಡಿ ಅವಕಾಶ ಕಲ್ಪಿಸಲಾಗಿದ್ದು, ಅಸಿಸ್ಟೆಂಟ್ ಕಮೀಷನರ್ ರವರಿಗೆ ಅಧಿಕಾರವಿರುತ್ತದೆ. ಸಕ್ರಮಾತಿಯನ್ನು ರದ್ದುಪಡಿಸುವ ಪೂರ್ವದಲ್ಲಿ ಸಕ್ರಮಾತಿ ಪಡೆದವನಿಗೆ ತನ್ನ ಅಹವಾಲನ್ನು ವ್ಯಕ್ತಪಡಿಸಲು ಅವಕಾಶ ನೀಡಬೇಕಾಗುತ್ತದೆ. |

ಸಂಖ್ಯೆ: ಆರ್ ಡಿ 28 ಎಲ್ ಜಿಕ್ಯೂ 2020

(ಆರ್. ಅಶೋಕ)
ಕಂದಾಯ ಸಚಿವರು